ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ಮಂಗಳೂರಿನಲ್ಲಿ ಕೈಗಾರಿಕೆ ಕೇಂದ್ರದ ಅಭಿವೃದ್ಧಿ ಮತ್ತು ಹೊಸ ಯೋಜನೆ ಕುರಿತು

ಶ್ರೀ ಐವನ್ ಡಿ'ಸೋಜಾ(ನಾಮನಿರ್ದೇಶನ ಹೊಂದಿದವರು):-

1521 (1791) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮಂಗಳೂರಿನಲ್ಲಿ ಕೈಗಾರಿಕಾ ಕೇಂದ್ರದ ಅಭಿವೃದ್ಧಿ ಮತ್ತು ಹೊಸ ಯೋಜನೆಗಳ ಬಗ್ಗೆ ಸರ್ಕಾರದ ಮುಂದೆ ಪ್ರಸ್ತಾವನೆಗಳು ಇವೆಯೇ; ಇದ್ದಲ್ಲಿ, ಅವು ಯಾವುವು; (ವಿವರ ನೀಡುವುದು)

(ಆ) ಮಂಗಳೂರಿನ MRPL/SEZ ಕೈಗಾರಿಕೆಯಲ್ಲಿ ವಿಸ್ತರಣೆ ಭೂಮಿ ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ವಿವರ ನೀಡುವುದು;

(ಇ) 2018-19, 2019-20ರಲ್ಲಿ ಕೈಗಾರಿಕೆಗಾಗಿ ಎಷ್ಟು ಭೂಮಿಯನ್ನು ವಶಪಡಿಸಲಾಗಿದೆ; ಎಷ್ಟು ಬೆಲೆಯನ್ನು ನಿಗದಿಪಡಿಸಲಾಗಿದೆ; ಭೂಮಿಯನ್ನು ಸ್ವಾಧೀನಪಡಿಸಲಾಗಿದೆಯೇ; (ವಿವರ ನೀಡುವುದು)

(ಈ) ಬೈಕಂಪಾಡಿ ಕೈಗಾರಿಕಾ ಪ್ರದೇಶದ ಎಷ್ಟು ಪ್ರಕರಣಗಳು ಅನ್ಯ ಉದ್ದೇಶಕ್ಕಾಗಿ ಭೂಮಿಯನ್ನು ಬಳಕೆ ಮಾಡಿರುವುದು ದಾಖಲಾಗಿವೆ? (ವಿವರ ನೀಡುವುದು)